ಈ ಲೇಖನದ ವಿಷಯಾನುಕ್ರಮಣಿಕೆ

# ಪ್ಲವಸಂವತ್ಸರದ ಕೃಷ್ಣಾಷ್ಟಮೀ

ಶ್ರೀ ಪ್ಲವನಾಮಸಂವತ್ಸರದ [2021] ಕೃಷ್ಣಾಷ್ಟಮೀ ಆಚರಣೆಯಲ್ಲಿ ವಿವಾದವಿದೆ.

ಉತ್ತರಾದಿಮಠದ ಪಂಚಾಂಗವು 29-8-2021 ಭಾನುವಾರದಂದು ಕೃಷ್ಣಾಷ್ಟಮಿ ಆಚರಣೆ ಮಾಡಬೇಕೆಂದು ತಿಳಿಸುತ್ತಿದೆ.

ಶ್ರೀ ಶ್ರೀಪಾದರಾಜಸಂಸ್ಥಾನ,
ಶ್ರೀಮದ್ ವ್ಯಾಸರಾಜಸಂಸ್ಥಾನ ಮತ್ತು
ಶ್ರೀಮದ್ ರಾಘವೇಂದ್ರಸಂಸ್ಥಾನದ
ಪಂಚಾಂಗಗಳು 30-8-2021
ಸೋಮವಾರದಂದು ಕೃಷ್ಣಜಯಂತಿಯ ಆಚರಣೆ ಮಾಡಬೇಕೆಂದು ತಿಳಿಸುತ್ತಿವೆ.

ಈ ಎರಡು ಪಕ್ಷಗಳಲ್ಲಿ ಯಾವುದು ಶ್ರೀಮದಾಚಾರ್ಯರ ನಿರ್ಣಯಗಳಿಗೆ ಮತ್ತು ಪ್ರಾಚೀನರ ಆಚರಣೆಗೆ  ಸಮ್ಮತ ಎನ್ನುವದನ್ನು

ನಿಷ್ಪಕ್ಷಪಾತವಾಗಿ ಚರ್ಚೆ ಮಾಡಿ ತಿಳಿದುಕೊಳ್ಳೋಣ.

## ಅಷ್ಟಮೀ ರೋಹಿಣಿಗಳ ಆರಂಭ ಅಂತ್ಯಗಳು

ಈ ಎಲ್ಲ ಪಂಚಾಂಗಗಳ ಪ್ರಕಾರ 29ನೆಯ ತಾರೀಕು ಭಾನುವಾರ ರಾತ್ರಿ 9-40 ರ ಸುಮಾರಿಗೆ ಮುಗಿಯುತ್ತದೆ, ಮತ್ತು ಅಲ್ಲಿಂದ ಅಷ್ಟಮೀ ಆರಂಭವಾಗುತ್ತದೆ. ಹಾಗೂ ಭಾನುವಾರ ಬೆಳಗಿನ ಜಾವವೇ ಆರಂಭವಾಗಿರುವ ಕೃತ್ತಿಕಾ ನಕ್ಷತ್ರವು ಸೋಮವಾರ ಬೆಳಗಿನ ಜಾವ 06:05 ರವರೆಗೆ ಇರುತ್ತದೆ.

ಅಂದರೆ 29ನೆಯ ತಾರೀಕು ಭಾನುವಾರ ಮಧ್ಯರಾತ್ರಿಯು 12 ಗಂಟೆ 22 ನಿಮಿಷ 44 ಸೆಕೆಂಡುಗಳಿಗೆ ಆಗುತ್ತದೆ.

(ಆಧುನಿಕ ಲೆಕ್ಕದಲ್ಲಿ ರಾತ್ರಿ 12ಗಂಟೆಗೆ ದಿನಾಂಕ ಮತ್ತು ಸಮಯ ಬದಲಾಗುತ್ತದೆ ಹೀಗಾಗಿ 00:22 AM, 30/9/2021 ಗೆ ಮಧ್ಯರಾತ್ರಿ ಸಂಭವಿಸುತ್ತದೆ. ಎರಡೂ ಒಂದೇ]

ಭಾನುವಾರ ಮಧ್ಯರಾತ್ರಿ ಅಷ್ಟಮಿ ಇದೆ. ರೋಹಿಣೀ ನಕ್ಷತ್ರವಿಲ್ಲ.

ಹಾಗೆಯೇ 30ನೆಯ ತಾರೀಕು ರಾತ್ರಿ 11-47 ಕ್ಕೆ ಅಷ್ಟಮಿ ಮುಗಿದು ನವಮಿ ಆರಂಭವಾಗುತ್ತದೆ. ಸೋಮವಾರ ಬೆಳಗಿನ ಜಾವ 06:05 ಕ್ಕೆ ಆರಂಭವಾಗುತ್ತಿರುವ ರೋಹಿಣೀ ನಕ್ಷತ್ರವು ಮಂಗಳವಾರ ಬೆಳಿಗ್ಗೆ 08:40 ರ ಸುಮಾರಿಗೆ ಮುಗಿಯುತ್ತದೆ.

ಸೋಮವಾರದ ಮಧ್ಯರಾತ್ರಿಯು 12:22:25 ಕ್ಕೆ ಸಂಭವಿಸುತ್ತಿದೆ. ಅಂದರೆ ಆಧುನಿಕ ಲೆಕ್ಕದ ಪ್ರಕಾರದ 31/08/2021 00:22:25 ಕ್ಕೆ ಮಧ್ಯರಾತ್ರಿ.

ಈ ಮಧ್ಯರಾತ್ರಿಯಲ್ಲಿ ಅಷ್ಟಮಿ ಇಲ್ಲ. ಮಧ್ಯರಾತ್ರಿಗಿಂತ ಒಂದೂ ಕಾಲು ಗಂಟೆ ಮುಂಚೆಯೇ ಅಷ್ಟಮಿ ಮುಗಿದಿದೆ. ಮಧ್ಯರಾತ್ರಿಯಲ್ಲಿ ರೋಹಿಣಿ ಮಾತ್ರ ಇದೆ.

ಈಗ ಪ್ರಶ್ನೆ ನಾವು ಯಾವ ದಿವಸ ಕೃಷ್ಣಾಷ್ಟಮಿಯನ್ನು ಆಚರಿಸಬೇಕು ಎಂದು?

## ಭಗವತ್ಪಾದರ ನಿರ್ಣಯ
## ಮಧ್ಯರಾತ್ರಿಯಲ್ಲಿರುವ ಅಷ್ಟಮಿಯೇ ಗ್ರಾಹ್ಯ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಜಯಂತೀನಿರ್ಣಯದಲ್ಲಿ ಸಂಶಯಕ್ಕೆ ಎಡೆಯಿಲ್ಲದಂತೆ ಪರಿಸ್ಪಷ್ಟವಾಗಿ ತಿಳಿಸಿದ್ದಾರೆ —

**ರೋಹಿಣ್ಯಾಂ ಅರ್ಧರಾತ್ರೇ ತು**
**ಯದಾ ಕಾಲಾಷ್ಟಮೀ ಭವೇತ್**
**ಜಯಂತೀ ನಾಮ ಸಾ ಪ್ರೋಕ್ತಾ**
**ಸರ್ವಪಾಪಪ್ರಣಾಶಿನೀ**
**ಯಸ್ಯಾಂ ಜಾತೋ ಹರಿಃ ಸಾಕ್ಷಾತ್**
**ನಿಶೀಥೇ ಭಗವಾನಜಃ|**

ಮಧ್ಯರಾತ್ರಿ ಎಂಬ ಅರ್ಥವುಳ್ಳ **ಅರ್ಧರಾತ್ರಿ** ಮತ್ತು **ನಿಶೀಥ** ಎಂಬ ಎರಡೂ ಶಬ್ದಗಳನ್ನು ಆಚಾರ್ಯರು ಇಲ್ಲಿ ಬಳಸಿದ್ದಾರೆ.

ಆಚಾರ್ಯರ ಈ ವಾಕ್ಯದ ಅರ್ಥ —

ಅರ್ಧರಾತ್ರಿಯಲ್ಲಿ ಅಷ್ಟಮಿ ಇದ್ದು ಜೊತೆಯಲ್ಲಿ ರೋಹಿಣಿಯೂ ಇದ್ದರೆ ಅದು ಕೃಷ್ಣಜಯಂತಿ.

ಅರ್ಧರಾತ್ರಿಯಲ್ಲಿ ಅಷ್ಟಮಿ ರೋಹಿಣಿಗಳಿದ್ದಾಗಲೇ ಹುಟ್ಟಿಲ್ಲದ ಶ್ರೀಮನ್ನಾರಾಯಣ ಶ್ರೀಕೃಷ್ಣನಾಗಿ ಹುಟ್ಟಿದ್ದು.

ಪ್ರತೀವರ್ಷವೂ ನಮಗೆ ಜಯಂತಿ ದೊರೆಯುವದಿಲ್ಲ.  ಅರ್ಧರಾತ್ರಿಯಲ್ಲಿ ಅಷ್ಟಮಿ ಇದ್ದರೆ ಕೃಷ್ಣಾಷ್ಟಮಿಯನ್ನು ಆಚರಿಸುತ್ತೇವೆ. ಅಷ್ಟಮೀ ರೋಹಿಣಿಗಳೆರಡೂ ಇದ್ದರೆ ಜಯಂತಿಯನ್ನು ಆಚರಿಸುತ್ತೇವೆ.  ಅಂತೂ ಕೃಷ್ಣಾಷ್ಟಮಿಗಾಗಲೀ ಕೃಷ್ಣಜಯಂತಿಗಾಗಲೀ ಮಧ್ಯರಾತ್ರಿಯಲ್ಲಿ ಅಷ್ಟಮಿ ಇರಲೇಬೇಕು.

**ಧರ್ಮಶಾಸ್ತ್ರಗಳ ಸಾಮಾನ್ಯ ನಿರ್ಣಯದ ಪ್ರಕಾರ ಅಷ್ಟಮಿಗೆ ಸಪ್ತಮಿಯ ವೇಧವಿದ್ದರೆ ಉಪವಾಸ ಮಾಡಬಾರದು. ಆದರೆ, ಮಧ್ಯರಾತ್ರಿಯಲ್ಲಿ ಅಷ್ಟಮಿ ದೊರೆಯುವಾಗ ಸಪ್ತಮೀವೇಧವನ್ನೂ ನೋಡತಕ್ಕದ್ದಲ್ಲ ಎಂದು ಸಕಲ ಮಾಧ್ವ ಜ್ಞಾನಿಗಳೂ ಒಮ್ಮತದಿಂದ ನಿರ್ಣಯಿಸಿರುವದು ಮಧ್ಯರಾತ್ರಿಯಲ್ಲಿ ಅಷ್ಟಮಿ ಇರಲೇಬೇಕು ಎಂಬ ಆಚಾರ್ಯರ ಈ ನಿರ್ಣಯದ ಆಧಾರದ ಮೇಲೆಯೇ.**

## ಶ್ರೀಮಧ್ವಾನುಜಾಚಾರ್ಯರ ನಿರ್ಣಯ
## ಮಧ್ಯರಾತ್ರಿಯೇ ಪೂಜಾಕಾಲ

ಆಚಾರ್ಯರ ಸಾಕ್ಷಾತ್ ತಮ್ಮಂದಿರಾದ ಶ್ರೀವಿಷ್ಣುತೀರ್ಥಾಚಾರ್ಯರು ಶ್ರೀಮದಾಚಾರ್ಯರ ವಾಕ್ಯವನ್ನೇ ಆಧರಿಸಿ ಅದಕ್ಕೆ ವ್ಯಾಖ್ಯಾನರೂಪವಾಗಿ ಸಂನ್ಯಾಸಪದ್ಧತಿಯಲ್ಲಿ ಮಧ್ಯರಾತ್ರಿಯಲ್ಲಿಯೇ ಪೂಜೆ ಎನ್ನುವದನ್ನು ಪರಿಸ್ಪಷ್ಟವಾಗಿ ತಿಳಿಸಿದ್ದಾರೆ —

**ಸಿಂಹಮಾಸೇ ತು ರೋಹಿಣ್ಯಾ**
**ಯುತಾಂ ಕೃಷ್ಣಾಷ್ಟಮೀಂ ಪುಮಾನ್**
**ಉಪೋಷ್ಯ ಮಧ್ಯರಾತ್ರೇ ಚ**
**ಪೂಜಯೇನ್ನಂದನಂದನಮ್ ।।**

ಕೃಷ್ಣಾಷ್ಟಮಿಯಂದು ಉಪವಾಸ ಮಾಡಿ ಮಧ್ಯರಾತ್ರಿಯಲ್ಲಿ ಶ್ರೀಕೃಷ್ಣನನ್ನು ಪೂಜಿಸಬೇಕು ಎಂದು ಮಧ್ಯರಾತ್ರಿಯೇ ಪೂಜಾನುಷ್ಠಾನದ ಕಾಲ ಎಂದು ಪರಿಸ್ಪಷ್ಟವಾಗಿ ನಿರ್ಣಯಿಸಿದ್ದಾರೆ.

**ಕರ್ಮಣೋ ಯಸ್ಯ ಯಃ ಕಾಲಃ**
**ತತ್ಕಾಲವ್ಯಾಪಿನೀ ತಿಥಿಃ।**
**ತಯಾ ಕರ್ಮಾಣಿ ಕುರ್ವೀತ**

## ಹ್ರಾಸವೃದ್ಧೀ ನ ಕಾರಣಮ್।

“ಯಾವ ಕರ್ಮವನ್ನು ಯಾವ ತಿಥಿಯ ಯಾವ ಕಾಲದಲ್ಲಿ ಮಾಡಬೇಕು ಎಂದು ಹೇಳಿದ್ದಾರೆಯೋ ಆ ತಿಥಿ ಆ ಕಾಲದಲ್ಲಿದ್ದಾಗಲೇ ಆ ಕರ್ಮದ ಆಚರಣೆಯನ್ನು ಮಾಡಬೇಕು” ಎಂದು ಅತ್ಯಂತ ನಿಖರವಾಗಿ ತಿಳಿಸುತ್ತದೆ.

ಮಧ್ಯರಾತ್ರಿಯೇ ಪೂಜಾಕಾಲ ಎಂದು ಶ್ರೀಮನ್ ಮಧ್ವಾನುಜಾಚಾರ್ಯರು ನಿರ್ಣಯಿಸಿರುವದರಿಂದ ಮತ್ತು ಕರ್ಮದ ಕಾಲದಲ್ಲಿ ಕರ್ಮದ ತಿಥಿ ಇರಬೇಕು ಎಂದು ಶಾಸ್ತ್ರದ ನಿರ್ಣಯವಿರುವದರಿಂದ ಮಧ್ಯರಾತ್ರಿಯಲ್ಲಿ ಅಷ್ಟಮಿ ಇದ್ದಾಗ ಮಾತ್ರ ನಾವು ಕೃಷ್ಣಾಷ್ಟಮಿಯನ್ನಾಗಲೀ ಮತ್ತು ಕೃಷ್ಣಜಯಂತಿಯನ್ನಾಗಲೀ ಆಚರಿಸಬೇಕು.

**ಶ್ರೀ ಕೃಷ್ಣಾಚಾರ್ಯರ ನಿರ್ಣಯ**
**ಹಿಂದಿನ ದಿನದ ಮಧ್ಯರಾತ್ರಿಯಲ್ಲಿ ಅಷ್ಟಮಿಯಿದ್ದರೆ ಅದೇ ಗ್ರಾಹ್ಯ**

ಶ್ರೀ ರಾಘವೇಂದ್ರತೀರ್ಥ ಗುರುಸಾರ್ವಭೌಮರ ಸಾಕ್ಷಾತ್ ಶಿಷ್ಯರಾದ ಶ್ರೀಕೃಷ್ಣಾಚಾರ್ಯರು ತಮ್ಮ ಸ್ಮೃತಿಮುಕ್ತಾವಲಿಯಲ್ಲಿ ವಿಪುಲವಾಗಿ ಪ್ರಮಾಣವಾಕ್ಯಗಳನ್ನು ಉದಾಹರಿಸಿ ತಮ್ಮ ವಾಕ್ಯಗಳಲ್ಲಿಯೇ ನಿರ್ಣಯವನ್ನೂ ಸಹ ನೀಡಿದ್ದಾರೆ —

ಗುರುಸಾರ್ವಭೌಮಸಂಶೋಧನಮಂದಿರದಿಂದ ಪ್ರಕಟವಾಗಿರುವ ಶ್ರೀ ಸ್ಮೃತಿಮುಕ್ತಾವಲಿ ಪುಸ್ತಕದ 115ನೇ ಪುಟ —

कृष्णा मासे च श्रावणे भवेत् ।
अर्धरात्रादधश्चोर्ध्वं कलयापि यदाष्टमी ।
जयन्ती नाम सा प्रोक्ता सर्वपापप्रणाशिनी ॥ इति ।

*तथा तत्रैव*—

अर्धरात्रादधश्चोर्ध्वमेकार्धघटिकान्विता ।
रोहिणी चाष्टमी ग्राह्या उपवासव्रतादिषु ॥

एवञ्चार्धरात्रव्यापिनी मुख्या । तदभावे रात्रियोगो ग्राह्य इति ज्ञेयम् । तत्र शुद्धा न विचार्या सन्देहाभावात् । विद्धायां त्वस्ति सन्देह इति सा विचार्यते । सा चतुर्विधा पूर्वेद्युरेव निशीथव्यापिनी, परेद्युरेव निशीथव्यापिनी, उभयत्र निशीथव्यापिनी, नोभयत्र निशीथव्यापिनी चेति । तत्र प्रथमद्वितीययोर्निशीथव्याप्तेः प्रयोजकत्वेन या निशीथव्यापिनी सा ग्राह्या । 'विशेषेणेन्दुसंयुतामि'ति वचनात् । या तु दिनद्वयेऽपि निशीथव्यापिनी तस्या उभयत्र रात्रियोगस्य च तुल्यत्वान्नानेन वचनेन निर्णयः । अपि तु न्यायेन वचनान्तरेण

ಇಲ್ಲಿ ಶ್ರೀಕೃಷ್ಣಾಚಾರ್ಯರು ಅಷ್ಟಮೀ ತಿಥಿ ಬರುವ ನಾಲ್ಕು ಪ್ರಸಂಗಗಳನ್ನು ಉಲ್ಲೇಖಿಸಿದ್ದಾರೆ —

1. ಹಿಂದಿನ ದಿನದ ಮಧ್ಯರಾತ್ರಿಯಲ್ಲಿ ಮಾತ್ರ ಅಷ್ಟಮಿ ಇರುವದು.

2. ಮುಂದಿನ ದಿನದ ಮಧ್ಯರಾತ್ರಿಯಲ್ಲಿ ಮಾತ್ರ ಅಷ್ಟಮಿ ಇರುವದು.
3. ಎರಡೂ ದಿನಗಳ ಮಧ್ಯರಾತ್ರಿಗಳಲ್ಲಿ ಅಷ್ಟಮಿ ಇರುವದು.

4. ಎರಡೂ ದಿನಗಳ ಮಧ್ಯರಾತ್ರಿಯಲ್ಲಿ ಅಷ್ಟಮಿ ಇಲ್ಲದೇ ಇರುವದು.

ಹೀಗೆ ವಿಭಾಗ ಮಾಡಿ ಶ್ರೀಕೃಷ್ಣಾಚಾರ್ಯರು ನಿರ್ಣಯ ನೀಡುತ್ತಾರೆ — **ಮಧ್ಯರಾತ್ರಿಯಲ್ಲಿ ಇರುವ ಅಷ್ಟಮಿಯೇ ಪ್ರಧಾನವಾದ್ದರಿಂದ, ಮೊದಲ ಎರಡು ಪಕ್ಷಗಳಲ್ಲಿ, ಯಾವ ದಿನದ ಮಧ್ಯರಾತ್ರಿಯಲ್ಲಿ ಅಷ್ಟಮಿ ಇದೆಯೋ ಅದೇ ಗ್ರಾಹ್ಯ. “ತತ್ರ ಪ್ರಥಮದ್ವಿತೀಯಯೋಃ**

## ನಿಶೀಥವ್ಯಾಪ್ತೇಃ ಪ್ರಯೋಜಕತ್ವೇನ ಯಾ ನಿಶೀಥವ್ಯಾಪಿನೀ ಸಾ ಗ್ರಾಹ್ಯಾ”

ಯಾವ ಮಠದ ಪಂಚಾಂಗದ ಪ್ರಕಾರವೂ ಎರಡೂ ದಿನಗಳ ಮಧ್ಯರಾತ್ರಿಯಲ್ಲಿ ಅಷ್ಟಮಿ ಇಲ್ಲ. ಇರುವದು ಭಾನುವಾರದ ಮಧ್ಯರಾತ್ರಿಯಲ್ಲಿ ಮಾತ್ರ.  ಆದ್ದರಿಂದ ಭಾನುವಾರದ ದಿವಸ ಉಪವಾಸ ಮಾಡಿ ಮಧ್ಯರಾತ್ರಿಯಲ್ಲಿ ಪೂಜೆ ಅರ್ಘ್ಯ ನೀಡುವದೇ ಶ್ರೇಷ್ಠ ಕ್ರಮ.

## ನಮಗೆ ಸೋಮವಾರ ಕೃಷ್ಣಜಯಂತಿ ಇಲ್ಲ

ಇತ್ತೀಚಿಗೆ ಒಂದು ಮಾಧ್ವಪತ್ರಿಕೆಯಲ್ಲಿ ಒಬ್ಬ ಯತಿಗಳ ಕೃತಿಯ ಆಯ್ದ ಭಾಗವನ್ನು ಪ್ರಕಟಿಸಿದ್ದಾರೆ. ಅದರಲ್ಲಿ ಅನೇಕ ಕಡೆ ಶಬ್ದಗಳ ಶುದ್ಧಿಯಿಲ್ಲ ಮತ್ತು ಒಂದು ಪ್ರಮಾಣವಾಕ್ಯದಲ್ಲಿ ಅನ್ವಯದ್ದೇ ಸಮಸ್ಯೆಯಿದೆ.

ಅದರ ಪ್ರಕಾರ ಹಿಂದಿನ ದಿನ ಮಧ್ಯರಾತ್ರಿ ಅಷ್ಟಮಿಯಿದ್ದು, ಮಾರನೆಯ ದಿವಸ ರೋಹಿಣೀ ನಕ್ಷತ್ರವಿದ್ದರೆ ಮಾರನೆಯ ದಿವಸ ಅರ್ಧ ಮುಹೂರ್ತವಾದರೂ ಅಷ್ಟಮಿ ದೊರೆತರೆ ಮಾರನೆಯ ದಿವಸವೇ ಉಪವಾಸ ಮಾಡಬೇಕು ಎಂದು ಅರ್ಥವಾಗುತ್ತದೆ.

ಆದರೆ ಇದು ಭಗವತ್ಪಾದರ, ಶ್ರೀಮನ್ಮನುಜಾಚಾರ್ಯರ ಮತ್ತು ಶ್ರೀ ಕೃಷ್ಣಾಚಾರ್ಯರ ನಿರ್ಣಯಗಳಿಗೆ ವಿರುದ್ಧವಾದದದ್ದು.

ಅರ್ಧರಾತ್ರಿಯಲ್ಲಿಯೇ ಜನನವಾದ್ದರಿಂದ ಅರ್ಧರಾತ್ರಿಯೇ ಪೂಜಾಕಾಲ.

ಅಷ್ಟಮೀತಿಥಿಯಲ್ಲಿಯೇ ಜನನವಾದ್ದರಿಂದ ಅಷ್ಟಮೀತಿಥಿಯ ಪೂಜಾತಿಥಿ.

ಹೀಗಾಗಿ ಅಷ್ಟಮೀತಿಥಿಯು ಅರ್ಧರಾತ್ರಿಯಲ್ಲಿ ಯಾವ ದಿವಸ ಇರುತ್ತದೆಯೋ ಅದೇ ದಿವಸವೇ ಆಚರಣೆಯೇ ಹೊರತು  ಮತ್ತೊಂದು ದಿವಸವಲ್ಲ.

ಎರಡೂ ದಿವಸಗಳಲ್ಲಿ ಅರ್ಧರಾತ್ರಿಯಲ್ಲಿ ಅಷ್ಟಮಿ ಇದ್ದರೆ ಮಾರನೆಯ ದಿವಸವೇ ಉಪವಾಸ, ಅದರಲ್ಲಿಯೂ ಸಂಶಯವಿಲ್ಲ.   ಇನ್ನು ಅರ್ಧರಾತ್ರಿಯಲ್ಲಿ ಅಷ್ಟಮಿ ಇದ್ದಾಗ ರೋಹಿಣಿಯೂ ದೊರೆತರೆ ಅದು ಕೃಷ್ಣಜಯಂತಿ, ಮಹಾಫಲಪ್ರದ. ಅದು ಪ್ರತೀವರ್ಷವೂ ದೊರೆಯುವದಿಲ್ಲ. ದೊರೆತಾಗ ಆಚರಿಸಬೇಕಷ್ಟೆ. ಅದಕ್ಕೇ ಆಚಾರ್ಯರು ರೋಹಿಣ್ಯಾಂ ಸತ್ಯಾಂ ಎಂದು ಸತಿಸಪ್ತಮಿಯನ್ನು ಬಳಸಿದ್ದಾರೆ. ದೊರೆತರೆ ಉಂಟು, ಇಲ್ಲದಿದ್ದರೆ ಇಲ್ಲ.

## ಸೋಮವಾರದ ಮಧ್ಯರಾತ್ರಿಯಲ್ಲಿ ನವಮಿ ಇದೆ

ಮಧ್ಯರಾತ್ರಿಯೇ ಪೂಜಾಕಾಲವಾದ್ದರಿಂದ ಮಧ್ಯರಾತ್ರಿಯಲ್ಲಿ ಅಷ್ಟಮಿ ಇರಲೇಬೇಕು ಎಂದು ತಿಳಿದೆವು. ಆದರೆ ಸೋಮವಾರ ರಾತ್ರಿ 11:45ಕ್ಕೆ ಅಷ್ಟಮಿ ಮುಗಿದು ನವಮಿ ಆರಂಭವಾಗಿ ಮಧ್ಯರಾತ್ರಿಯಲ್ಲಿ ಸ್ಪಷ್ಟವಾಗಿ ನವಮಿ ಬಂದಿರುತ್ತದೆ.

ಮತ್ತು ಆ ದಿವಸ ಮಧ್ಯರಾತ್ರಿ ಕಳೆದು ಮೂರು ನಿಮಿಷವಾದ ಮೇಲೆ ಅಂದರೆ 12:28ಕ್ಕೆ ಚಂದ್ರೋದಯವಿದೆ. ಚಂದ್ರೋದಯ-ವಾಗುತ್ತಿರುವದು ನವಮಿಯಲ್ಲಿ.

ಹೀಗಾಗಿ ಪೂಜಾಕಾಲದಲ್ಲಾಗಲೀ ಮತ್ತು ಚಂದ್ರೋದಯವಾದ ಮೇಲೆ ಅರ್ಘ್ಯ ನೀಡಬೇಕಾದ್ದರಿಂದ ಚಂದ್ರೋದಯದ ಕಾಲಕ್ಕಾಗಲೀ ಅಷ್ಟಮಿ ಇಲ್ಲವೇ ಇಲ್ಲ. ನವಮಿ ಇದೆ. **ಹೀಗಾಗಿ ಈ ಬಾರಿ ಸೋಮವಾರದಂದು ಕೃಷ್ಣಾಷ್ಟಮಿಯ ಆಚರಣೆ ಸರ್ವಥಾ ಸಲ್ಲದು. ಈ ನಿರ್ಣಯ ಪುರಿ ಜಗನ್ನಾಥದಿಂದ ಪಶ್ಚಿಮದಲ್ಲಿರುವವರಿಗೆ ಮಾತ್ರ ಅನ್ವಯಿಸುತ್ತದೆ.**

## ಭಾನುವಾರವೇ ಕೃಷ್ಣಾಷ್ಟಮಿಯ ಆಚರಣೆ

ಭಾನುವಾರದಂದು ರಾತ್ರಿ 9:40 ಕ್ಕೆ ಸಪ್ತಮೀ ಮುಗಿದು ಅಷ್ಟಮಿ ಆರಂಭವಾಗುತ್ತದೆ.

12:22: ಕ್ಕೆ ಮಧ್ಯರಾತ್ರಿ. ಆ ಸಮಯಕ್ಕೆ ಪರಿಸ್ಪಷ್ಟವಾಗಿ ಅಷ್ಟಮಿ ಇದೆ.

ಆ ದಿವಸ ಚಂದ್ರೋದಯ 11:39ಕ್ಕೆ. ಹೀಗಾಗಿ ಚಂದ್ರೋದಯವಾಗುತ್ತಿರುವದೇ ಅಷ್ಟಮಿ ತಿಥಿಯಲ್ಲಿ.

ಮಧ್ಯರಾತ್ರಿಯಲ್ಲಿ ಕೃತ್ತಿಕಾ ನಕ್ಷತ್ರವಿದೆ. ರೋಹಿಣಿ ಇದ್ದಿದ್ದರೆ ಕೃಷ್ಣಜಯಂತಿಯಾಗುತ್ತಿತ್ತು. ರೋಹಿಣಿ ಇಲ್ಲವಾದ್ದರಿಂದ ಇದು ಕೃಷ್ಣಾಷ್ಟಮಿ.

## ಅರ್ಘ್ಯಕಾಲದಲ್ಲಿ ಚಂದ್ರೋದಯವಾಗಿರಬೇಕು

ಶುಕ್ಲಪಕ್ಷದ ಅಷ್ಟಮಿಯಂದು ಚಂದ್ರೋದಯ ಮಧ್ಯಾಹ್ನದ ಆಸುಪಾಸಿನಲ್ಲಿ ಆಗುತ್ತದೆ.

ಕೃಷ್ಣಪಕ್ಷದ ಅಷ್ಟಮಿಯಂದು ಮಧ್ಯರಾತ್ರಿಯ ಆಸುಪಾಸಿನಲ್ಲಿ ಚಂದ್ರೋದಯವಾಗುತ್ತದೆ.

ಕೆಲವು ಬಾರಿ ಮಧ್ಯರಾತ್ರಿಗೆ ಐದು ಹತ್ತು ನಿಮಿಷ ಇರಬೇಕಾದರೇ ಚಂದ್ರೋದಯವಾಗುತ್ತದೆ. ಕೆಲವು ಬಾರಿ ಮಧ್ಯರಾತ್ರಿ ಕಳೆದು ಐದ್ಹತ್ತು ನಿಮಿಷಗಳಲ್ಲಿ ಚಂದ್ರೋದಯವಾಗುತ್ತದೆ.

ಅರ್ಘ್ಯ ನೀಡಬೇಕಾದರೆ ಚಂದ್ರೋದಯವಾಗಿರಬೇಕೆ ಹೊರತು ಚಂದ್ರೋದಯವಾಗುತ್ತಿದ್ದಂತೆ ಅರ್ಘ್ಯವಲ್ಲ.

ಪ್ರಧಾನಪೂಜಾಕಾಲವಾದ ಮಧ್ಯರಾತ್ರಿಯಲ್ಲಿ ಪೂಜೆ ಮಾಡಿ ಚಂದ್ರೋದಯವಾಗಿದ್ದರೆ ಆಗಲೇ ಅರ್ಘ್ಯ, ಇಲ್ಲದಿದ್ದರೆ ಚಂದ್ರೋದಯಕ್ಕಾಗಿ ಕಾದು ಚಂದ್ರೋದಯ ಕಾಲದಲ್ಲಿ ಅರ್ಘ್ಯವನ್ನು ನೀಡಬೇಕು.

ಈ ಬಾರಿ ಮಧ್ಯರಾತ್ರಿಗಿಂತ ಮುಂಚೆಯೇ ಚಂದ್ರೋದಯವಾಗಿರುವದರಿಂದ ಮಧ್ಯರಾತ್ರಿಯಲ್ಲಿ ಪೂಜೆ ಮಾಡಿ ತಕ್ಷಣ ಅರ್ಘ್ಯವನ್ನು ನೀಡಬೇಕು.

## ವಿಶ್ವದ ಇತರ ಸ್ಥಳಗಳಲ್ಲಿ

## ಪುರಿಯಿಂದ ನ್ಯೂಜಿಲೆಂಡಿನವರೆಗೆ ಸೋಮವಾರ ಕೃಷ್ಣಜಯಂತಿ

From Longitude 85.8 to 180
Krishnajayanti on 30/08/2021

85.4ನೇ ರೇಖಾಂಶದಿಂದ ಆರಂಭಿಸಿ ಪೂರ್ವದಲ್ಲಿ ಸಮಗ್ರ ನ್ಯೂಜಿಲೆಂಡಿನವರೆಗೆ ಸೋಮವಾರ ಮಧ್ಯರಾತ್ರಿಗೆ ಅಷ್ಟಮಿ ಮತ್ತು ರೋಹಿಣೀ ದೊರೆಯುವದರಿಂದ ದೊರೆಯುವದರಿಂದ ಅವರಿಗೆ ಸೋಮವಾರ ಕೃಷ್ಣಜಯಂತಿಯ ಆಚರಣೆ.

ಅಂದರೆ, ಸಿಂಗಪೂರ್, ಮಲೇಶಿಯಾ, ಜಪಾನ್, ಆಸ್ಟ್ರೇಲಿಯಾ, ನ್ಯೂಜಿಲೆಂಡ್ ಮುಂತಾದ ಪ್ರದೇಶಗಳಲ್ಲಿ ಸೋಮವಾರ ಕೃಷ್ಣಜಯಂತಿ.

ಅಲ್ಲಿ ವಾಸಿಸುವ ಸಜ್ಜನರು ಸೋಮವಾರ ಉಪವಾಸ ಮಾಡಿ ಮಧ್ಯರಾತ್ರಿ ಚಂದ್ರೋದಯವಾದ ನಂತರ ಮಂಗಳವಾರ ಬೆಳಿಗ್ಗೆ ಸೂರ್ಯೋದಯಾನಂತರ ಪಾರಣೆ ಮಾಡಬೇಕು.

## ಪುರಿಯಿಂದ ಲಂಡನ್ನಿನವರೆಗೆ ಭಾನುವಾರ ಕೃಷ್ಣಾಷ್ಟಮಿ

From Longitude 85.8 to -10
Krishnashtamii on 30/08/2021

ಲಂಡನ್ -1 ರಲ್ಲಿ ಬರುತ್ತದೆ. ಅದಕ್ಕಿಂತ ಪೂರ್ವದಲ್ಲಿ ಇನ್ನೂ 9 longitude ಗಳಲ್ಲಿ ಅಂದರೆ Ireland ನ ವರೆಗೆ ಭಾನುವಾರ ಕೃಷ್ಣಾಷ್ಟಮೀ.

## ಲಂಡನ್ನಿನಿಂದ ಪೂರ್ವಕ್ಕೆ ಭಾನುವಾರ ಕೃಷ್ಣಜಯಂತಿ

ಅದರಿಂದ ಆಚೆಗೆ ಅಂದರೆ ಗ್ರೀನ್ ಲ್ಯಾಂಡ್ ಮತ್ತು ಸಮಗ್ರ ಅಮೇರಿಕಾ ಕೆನಡಾ ಮೆಕ್ಸಿಕೋ ಬ್ರೆಜಿಲ್ ಮುಂತಾದ ಎಲ್ಲ ಪ್ರದೇಶಗಳಲ್ಲಿ, ಅಂದರೆ -10 ರಿಂದ -180 ರವರೆಗೆ, ಭಾನುವಾರ ಮಧ್ಯರಾತ್ರಿಗೆ ರೋಹಿಣೀ ನಕ್ಷತ್ರವೂ ಸಹ ದೊರೆಯುವದರಿಂದ ಅವರಿಗೆ ಕೃಷ್ಣಜಯಂತಿ. **ಈ ಎರಡೂ ಪಕ್ಷದವರು ಭಾನುವಾರ ಉಪವಾಸ ಮಾಡಿ ಮಧ್ಯರಾತ್ರಿಯಲ್ಲಿ ಅರ್ಘ್ಯ ನೀಡಿ ಸೋಮವಾರ ಬೆಳಿಗ್ಗೆ ಪಾರಣೆ ಮಾಡಬೇಕು.**

## ಪರಿಶುದ್ಧ ಮಾರ್ಗದಲ್ಲಿ ನಡೆಯೋಣ

ಕೃಷ್ಣಾಷ್ಟಮಿ 20 ಕೋಟಿ ಏಕಾದಶಿಗಳಿಗೆ ಸಮವಾದ ಮಹಾವ್ರತ. ಅಂದರೆ ಒಂದು ಮಹಾಯುಗದಲ್ಲಿ ಅಂದರೆ 43 ಲಕ್ಷದ 20ಸಾವಿರ ವರ್ಷಗಳಲ್ಲಿ ಬರುವ ಎಲ್ಲ ಏಕಾದಶಿಗಳನ್ನು ಆಚರಿಸಿದರೆ ಏನು ಪುಣ್ಯ ಒದಗಿಬರುತ್ತದೆಯೋ ಆಷ್ಟೂ ಪುಣ್ಯವನ್ನು ಸ್ವಾಮಿ ಒಂದೇ ದಿವಸದ ಉಪವಾಸದಿಂದ ಕರುಣಿಸುತ್ತಾತೆ.

ಹೀಗಾಗಿ ಕೃಷ್ಣಾಷ್ಟಮಿಗಿಂತ ಶ್ರೇಷ್ಠವಾದ ಮತ್ತೊಂದು ವ್ರತವೇ ಇಲ್ಲ. ಅಂತಹುದನ್ನು ಪರಿಶುದ್ಧವಾದ ಕ್ರಮದಲ್ಲಿ ಆಚರಿಸಬೇಕೇ ಹೊರತು ತಪ್ಪಾಗಿ ಆಚರಿಸತಕ್ಕದ್ದಲ್ಲ.

ಮಠಕ್ಕಿಂತ ಮತ ದೊಡ್ಡದು ಎನ್ನುವದನ್ನು ನಾವು ಮರೆಯಬಾರದು.

ಸಕಲಸಜ್ಜನರಿಗೂ ಶ್ರೀಕೃಷ್ಣ ಜನ್ಮಾಷ್ಟಮಿಯ ಶುಭಾಶಯಗಳು.

— ವಿಷ್ಣುದಾಸ ನಾಗೇಂದ್ರಾಚಾರ್ಯ

## ಕೃಷ್ಣಾಷ್ಟಮಿ ಆಚರಣೆಯ ವಿಧಿವಿಧಾನ

### ಈ ಲೇಖನದ ಆಡಿಯೋ

http://vishwanandini.com/fullprashnottara.php?serialnumber=VNP236

### ಕೃಷ್ಣಾಷ್ಟಮೀ ಅರ್ಘ್ಯಪ್ರದಾನ

**ಶ್ರೀಕೃಷ್ಣಜನ್ಮಾಷ್ಟಮಿಯಂದು ಶ್ರೀಕೃಷ್ಣನಿಗೆ ಮತ್ತು ಚಂದ್ರನಿಗೆ ಅರ್ಘ್ಯ ನೀಡುವ ಕ್ರಮ. ಮಂತ್ರ ಮತ್ತು ಕ್ರಮದ ವಿವರಣೆಯೊಂದಿಗೆ.**

http://vishwanandini.com/fullupanyasa.php?serialnumber=VNU119

### ಜನ್ಮಾಷ್ಟಮೀ ಆಚರಿಸುವ ವಿಧಾನದ ಮೂರು ಲೇಖನಗಳು

http://vishwanandini.com/fullarticle.php?serialnumber=VNA117

http://vishwanandini.com/fullarticle.php?serialnumber=VNA118

http://vishwanandini.com/fullarticle.php?serialnumber=VNA119

# ವಿಶ್ವನಂದಿನಿಗೆ ಸಜ್ಜನರ ಸಹಾಯದ ಅಗತ್ಯವಿದೆ

ಪರಮಾತ್ಮನನ್ನು ತಿಳಿಸಿಕೊಡುವ ದಿವ್ಯಗ್ರಂಥಗಳನ್ನು ತಿಳಿಯಾದ ಭಾಷೆಯಲ್ಲಿ ಸಜ್ಜನರಿಗೆ ತಲುಪಿಸಲು ವಿಶ್ವನಂದಿನಿ 10000 ಗಂಟೆಗಳ ಉಪನ್ಯಾಸಗಳ ಗುರಿಯನ್ನೂ, 30000 ಪುಟಗಳ ಲೇಖನದ ಗುರಿಯನ್ನೂ ಹೊಂದಿದೆ.

**ವಿಶ್ವನಂದಿನಿಯ ಎಲ್ಲ ಉಪನ್ಯಾಸಗಳೂ, ಲೇಖನಗಳೂ ಪ್ರತಿಯೊಬ್ಬರಿಗೂ ಉಚಿತವಾಗಿ ಲಭ್ಯ.**

**ಈ ಬೃಹತ್ ಜ್ಞಾನಸತ್ರ ನಿಮ್ಮ ನೆರವಿಲ್ಲದೇ ಮುಂದುವರೆಯಲು ಸಾಧ್ಯವಿಲ್ಲ.**

ಈ ಜ್ಞಾನಕಾಯ ಕ್ಕೆ ನೆರವು ನೀಡುವ ಸಜ್ಜನರು ಕೆಳಗಿನ ಖಾತೆಗೆ ಹಣವನ್ನು ವಗಾ ಯಿಸಬಹುದು

- **Account Name** **VISHWANANDINI**
- **Account Number** **35368588017**
- **Account Type** **Current Account**
- **Bank** **State Bank of India**
- **Branch** **T. Narasipura, Mysore**
- **NEW IFSC** **SBIN0040076**

Please WhatsApp the transaction details to
**990155149**

ಈಗಾಗಲೇ ನೆರವು ನೀಡಿದ, ನೀಡುತ್ತಿರುವ ಸಜ್ಜನರಿಗೆ
ನನ್ನ  ಮನಃಪೂರ್ವಕ ಕೃತಜ್ಞತೆಗಳು.

**ನೀವು ವಿಶ್ವನಂದಿನಿಯ ಖಾತೆಗೆ ಹಣವನ್ನು ವರ್ಗಾಯಿಸುವಾಗ**

**"ವಿಶ್ವನಂದಿನಿ ಗಮ್ಯ ತಲುಪಲಿ"**

**ಎಂದು ಗುರುದೇವತೆಗಳಗೆ,**
**ಶ್ರೀ ವೇದವ್ಯಾಸದೇವರಿಗೆ**
**ಪ್ರಾರ್ಥನೆ ಸಲ್ಲಿಸುವದನ್ನು ಮರೆಯಬೇಡಿ.**

ಸಜ್ಜನರ ಪ್ರಾರ್ಥನೆಯನ್ನು
ಶ್ರೀಹರಿ ಮನ್ನಿಸುತ್ತಾನೆ.

— ವಿಷ್ಣುದಾಸ ನಾಗೇಂದ್ರಾಚಾರ್ಯ


**Vishnudasa Nagendracharya**

No. 2, "Sri Madhwanuja Mandiram"
Kaveri Marga,  Hemmige Village,
Talakadu,  T Narasipura,
Mysore - 571122, Karnataka, India

nagendracharya@yahoo.co.in

WhatsApp:  9901 551 491